# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ : 131
2. ವಿಧಾನಪರಿಷತ್ತಿನ ಸದಸ್ಯರ ಹೆಸರು : ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 10.07.2018
4. ಉತ್ತರಿಸುವ ಸಚಿವರು : ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳು ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಜಿಕಾಫ್ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಉಚ್ಚನ್ಯಾಯಾಲಯದ ರಿಟ್ ಅರ್ಜಿಗೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರವು ಅನ್ವರ್ ಮಾನಪ್ಪಾಡಿ ವರದಿಯನ್ನು ಸದನದಲ್ಲಿ ಮಂಡಿಸುವುದಾಗಿ ನ್ಯಾಯಾಲಯಕ್ಕೆ ಅಫಿಡವಿಟ್ ಸಲ್ಲಿಸಿರುವುದು ನಿಜವೇ? ಆ ರಿಟ್ ಅರ್ಜಿಯ ಸಂಖ್ಯೆ ಮತ್ತು ಉಚ್ಚನ್ಯಾಯಾಲಯದ ತೀರ್ಪಿನ ವಿವರ ನೀಡುವುದು. | ಶ್ರೀ ಎಸ್.ಕೆ.ಕಾಂತ, ಮಾಜಿ ಕಾರ್ಮಿಕ ಸಚಿವರು ಮಾನ್ಯ ಉಚ್ಚನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:19245/2015ನ್ನು ಸಲ್ಲಿಸಿರುತ್ತಾರೆ. ರಿಟ್ ಅರ್ಜಿಯಲ್ಲಿ, ಅರ್ಜಿದಾರರು ಕರ್ನಾಟಕ ಅಲ್ಪಸಂಖ್ಯಾತರ ಆಯೋಗವು ಸರ್ಕಾರಕ್ಕೆ ಸಲ್ಲಿಸಿರುವ ವಿಶೇಷ ವರದಿಯನ್ನು ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧಿನಿಯಮ 1994ರ ನಿಯಮ 10(2) ರನ್ವಯ ರಾಜ್ಯ ವಿಧಾನ ಸಭೆ ಹಾಗೂ ವಿಧಾನ ಪರಿಷತ್ತಿನ ಉಭಯ ಸದನಗಳ ಮುಂದೆ ಮಂಡಿಸಲು ನಿರ್ದೇಶನ ನೀಡಬೇಕೆಂದು ಪ್ರಾರ್ಥಿಸಿರುತ್ತಾರೆ.<br>ವಿಶೇಷ ವರದಿಯ ಬಗ್ಗೆ ಕಡತವನ್ನು ಕಾನೂನು ಇಲಾಖೆಗೆ ಸಲ್ಲಿಸಲಾಗಿದ್ದು, ಕಾನೂನು ಇಲಾಖೆಯು ಅಡ್ವೊಕೇಟ್ ಜನರಲ್‌ರವರ ಅಭಿಪ್ರಾಯ ಪಡೆಯುವಂತೆ ತಿಳಿಸಿದ್ದು, ಅಭಿಪ್ರಾಯ ಪಡೆದ ತಕ್ಷಣ ವಿಶೇಷ ವರದಿಯನ್ನು ಉಭಯ ಸದನಗಳಲ್ಲಿ ಮಂಡಿಸುವ ಬಗ್ಗೆ ಸಚಿವ ಸಂಪುಟದ ನಿರ್ಣಯಕ್ಕಾಗಿ ಕಡತವನ್ನು ಮಂಡಿಸಲು ಕ್ರಮವಹಿಸಲಾಗುವುದೆಂದು ಮಾನ್ಯ ಉಚ್ಚನ್ಯಾಯಾಲಯಕ್ಕೆ ಅಫಿಡವಿಟ್ ಸಲ್ಲಿಸಲಾಗಿದೆ.<br><br>ಮಾನ್ಯ ಉಚ್ಚನ್ಯಾಯಾಲಯದ ದಿನಾಂಕ:10-09-2015 ರಂದು ನೀಡಿದ ತೀರ್ಪು ಕೆಳಕಂಡಂತಿದೆ.<br><br>Mr.A.G.Shivanna, learned Additional Advocate General-1, appears on behalf of the State respondents and submits after obtaining instructions, that the report of the Karnataka State Minorities Commission submitted to the Hon'ble Chief Minister on March 26, 2012, shall be placed before both the Legislative Council and the Legislative Assembly of Karnataka in the February, 2016 session.<br><br>Recording the said concession, this writ petition stands disposed of. |

| | | |
|---|---|---|
| ಆ) | ರಾಜ್ಯ ಸರ್ಕಾರವು ಶ್ರೀ ಅನ್ವರ್ ಮಾನಪ್ಪಾಡಿ ವರದಿಯನ್ನು ಪರಿಷತ್ತಿನ ಹಕ್ಕು ಬಾಧ್ಯತೆ ಸಮಿತಿಯ ಶಿಫ್ಹಾರಸ್ಸಿನ ಅನುಗುಣವಾಗಿ ಉತ್ತರ ನೀಡುವುದೇ | ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧ್ಯಕ್ಷರಾಗಿದ್ದ ಅನ್ವರ್ ಮಾನಪ್ಪಾಡಿಯವರು ಸರ್ಕಾರಕ್ಕೆ ದಿನಾಂಕ:26-03-2012 ರಂದು ಸಲ್ಲಿಸಿದ್ದ ವರದಿಯ ಮೇಲೆ ಕಾನೂನು ಇಲಾಖೆಯ ಅಭಿಪ್ರಾಯದೊಂದಿಗೆ ಅಡ್ವೊಕೇಟ್ ಜನರಲ್‌ರವರ ಅಭಿಪ್ರಾಯ ಪಡೆದು ದಿನಾಂಕ:03-03-2016 ರಂದು ಸಚಿವ ಸಂಪುಟದ ಮುಂದೆ ಮಂಡಿಸಲಾಯಿತು. ಸಚಿವ ಸಂಪುಟವು ಆಯೋಗದ ಶಿಫ್ಹಾರಸ್ಸುಗಳನ್ನು ತಿರಸ್ಕರಿಸಿದೆ.<br><br>ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧಿನಿಯಮ 1994 ರ ನಿಯಮ 10(2) ರನ್ವಯ ವಿಶೇಷ ವರದಿಯ ಶಿಫಾರಸ್ಸುಗಳ ಮೇಲೆ ಕೈಗೊಂಡ ಕ್ರಮಗಳ ಬಗ್ಗೆ ಹಾಗೂ ಕೈಗೊಳ್ಳಬಹುದಾದ ಕ್ರಮಗಳ ವಿವರಗಳ ಬಗ್ಗೆ ಮೆಮೋರಂಡಂನೊಂದಿಗೆ ಉಭಯ ಸದನಗಳಲ್ಲಿ ದಿನಾಂಕ:05-03-2016 ರಂದು ಮಂಡಿಸಲಾಗಿದೆ. |

ಕಡತ ಸಂಖ್ಯೆ: MWD 184 WES 2018

(ಬಿ.ಜೆಡ್.ಜಮೀರ್ ಅಹಮದ್ ಖಾನ್)
ಆಹಾರ ಮತ್ತು ನಾಗರೀಕ
ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ
ಹಾಗೂ ಅಲ್ಪಸಂಖ್ಯಾತರ ಕಲ್ಯಾಣ
ಔಕಾಫ್ ಸಚಿವರು

D/desktop/July session duties folder